- **"ರೋದನಾತ್ ರುದ್ರ:" ಜನ್ಮ –** "ಮಹತ್" ತತ್ವಕ್ಕೆ ಅಭಿಮಾನಿಯಾದ ಬ್ರಹ್ಮನಿಂದ ರುದ್ರದೇವರ ಜನ್ಮವಾದಾಗ ಮಗು ಸತತವಾಗಿ ರೋದಿಸುತ್ತಿತ್ತು. ಹುಟ್ಟಿದ ಕೂಡಲೇ ರೋದಿಸುತ್ತಿದ್ದರಿಂದ ಅವನಿಗೆ "ರುದ್ರ" ಎಂಬ ನಾಮಕರಣ ಮಾಡಿದ ಬ್ರಹ್ಮ.
- ಮಂಗಳಕರನಾದ್ದರಿಂದ – **"ಶಿವ"**
- ರುದ್ರದೇವರನ್ನು **ವಾಮದೇವ** ಎಂದು ಕರೆಯುತ್ತಾರೆ. ವಾಮ ಎಂದರೆ ಸುಂದರ. ಹರಿವಾಯುಬ್ರಹ್ಮದೇವರನ್ನು ಬಿಟ್ಟರೆ ರುದ್ರನಷ್ಟು ಸುಂದರರು ಯಾರೂ ಇಲ್ಲ. ೨೮ ಗುಣಗಳುಳ್ಳವನು ರುದ್ರ. ಸುಂದರನಾದುದರಿಂದ ವಾಮದೇವ. ಪರಮಾತ್ಮನನ್ನು ತನ್ನ ಎಡಭಾಗದಲ್ಲಿ ಇಟ್ಟುಕೊಂಡಿರುವುದರಿಂದ – **"ವಾಮದೇವ."**
- ವೃಷಬಧ್ವಜನಾದ್ದರಿಂದ – **"ವೃಷಧ್ವಜ"**
- ಚರ್ಮವನ್ನು ಧರಿಸಿರುವುದರಿಂದ – **"ಕೃತ್ತಿವಾಸ"**
- ಸುಖದ ನೆಲೆಯೇ ಶಿವನಾದ್ದರಿಂದ – **"ಶಂಭು"**
- ಚತುರ್ಮುಖನ ಕ್ರೋಧದಿಂದ ತತ್ ಕ್ಷಣದಲ್ಲಿ ಹುಟ್ಟಿದ್ದರಿಂದ – **"ಸದ್ಯೋಜಾತ"**
- ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿರುವುದರಿಂದ – **"ಗಂಗಾಧರ"**
- ಪಿನಾಕ ಧನಸ್ಸನ್ನು ಧರಿಸಿರುವುದರಿಂದ – **"ಪಿನಾಕಿ"**
- ಸಮುದ್ರಮಥನ ಕಾಲದಲ್ಲಿ ಕಾಲಕೂಟವಿಷವನ್ನು ಪರಮಾತ್ಮನ ಆಜ್ಞೆಯಂತೆ ಭಕ್ಷಿಸಿದ ವಾಯುದೇವರು, ಕಡೆಗೆ ಸ್ವಲ್ಪವೇ ಸ್ವಲ್ಪ ವಿಷವನ್ನು ಅದನ್ನೂ ಚೆನ್ನಾಗಿ ಮಥಿಸಿ ಕೊಟ್ಟಾಗ ಅದನ್ನು ಭಕ್ಷಿಸಿ – **"ವಿಷಕಂಠ"**
- ಸಾರಂಗ (ಜಿಂಕೆ)ಯನ್ನು ಕೊಂದು ತನ್ನ ಕೈಯಲ್ಲಿ ಇಟ್ಟುಕೊಂಡಿರುವುದರಿಂದ **"ಸಾರಂಗಪಾಣಿ"**
- ಶಿವನ ಕೈಯಲ್ಲಿ ತ್ರಿಶೂಲಧರಿಸಿರುವುದರಿಂದ – **"ತ್ರಿಶೂಲಪಾಣಿ"**
- ಡಮರುಗವನ್ನು ತನ್ನ ಕೈಯಲ್ಲಿ ಧರಿಸಿರುವುದರಿಂದ – **"ಡಮರುಗಪಾಣಿ"**
- ಚಂದ್ರನನ್ನು ಶಿರದಲ್ಲಿ ಧರಿಸಿರುವುದರಿಂದ – **"ಚಂದ್ರಶೇಖರ"(ಸೋಮಶೇಖರ)**

- ಶತ್ರುಭಯಂಕರನಾದ್ದರಿಂದ – **"ಉಗ್ರ"**
- ನಟ, ನಾಟ್ಯದಲ್ಲಿ ಪ್ರಸಿದ್ಧನಾದುದರಿಂದ – **"ನಟರಾಜ"**
- ಸದಾ ಸಜ್ಜನರಿಗೆ ಮಂಗಳವನ್ನು ಕರುಣಿಸುವನಾದ್ದರಿಂದ – **"ಸದಾಶಿವ"**
- ನಾಗ (ಸರ್ಪವನ್ನು)ನನ್ನು ಆಭರಣವಾಗಿರುವುದರಿಂದ – **"ನಾಗಾಭರಣ"**
- ಗಜಾಸುರನೆಂಬ ಅಸುರನನ್ನು ಕೊಂದು ಅವನ ಚರ್ಮವನ್ನು ಸ್ವತ: ಧರಿಸಿರುವುದರಿಂದ – **"ಗಜಚರ್ಮಾಂಭರಧರ"**
- ಎತ್ತನ್ನು ತನ್ನ ವಾಹನವಾಗಿ ಹೊಂದಿರುವುದರಿಂದ – **"ನಂದಿವಾಹನ"**
- ತ್ರಿಪುರಾಸುರಾದಿಗಳನ್ನು ಸಂಹಾರ ಮಾಡಿದ್ದರಿಂದ – **"ತ್ರಿಪುರಾರಿ"**
- ಮೂರು ಕಣ್ಣುಳ್ಳವನಾದ್ದರಿಂದ – **"ಮುಕ್ಕಣ್ಣ" (ಮೂರು ಕಣ್ಣುಗಳಲ್ಲಿ ಸೂರ್ಯ, ಚಂದ್ರ ಮತ್ತು ಅಗ್ನಿ ನೆಲೆಸಿದ್ದಾರೆ)**
- ಸುಖವನ್ನು ನೀಡುವನಾದ್ದರಿಂದ – **"ಶಂಕರ"**
- ಸಮರ್ಥರಾದ ಇಂದ್ರಾದಿಗಳಿಗಿಂತಲೂ ಮಹಾಸಮರ್ಥನಾದ್ದರಿಂದ – **"ಮಹೇಶ್ವರ"**
- ಮೃತ್ಯುವಿಗೆ ಅಭಿಮಾನಿಯಾದ ಯಮನನ್ನೂ ಮೀರಿಸಿರುವುದರಿಂದ **"ಮೃತ್ಯುಂಜಯ"**
- ಕೊರಳು ಮತ್ತು ಮೈಮೇಲೆ ನಾಗಗಳಿಂದಲಂಕೃತನಾದ್ದರಿಂದ **"ನಾಗಭೂಷಣ"**
- ತಪಸ್ಸಿನಿಂದಾಗಿ ಜಟೆಯನ್ನು ಹೊಂದಿರುವ ಕಾರಣದಿಂದ **"ಧೂರ್ಜಟಿ"**
- ಕಾಮನನ್ನು ಕೊಂದದ್ದರಿಂದ – **"ಕಾಮರಿ"**
- ಕಲ್ಪಗಟ್ಟಲೆ ಲವಣಸಾಗರದಲ್ಲಿ ಘೋರತಪಸ್ಸನ್ನು ಮಾಡಿದ್ದರಿಂದಾಗಿ **"ಉಗ್ರತಪಸ್"**